# ಹೆಮ್ಮೂಗು

ಇದು ಕಸ್ತೂರಿ. ಇದು ಪುನಗು.
ಇದರ ವಾಸನೆ ನೋಡು!
ಇದು ಅತ್ತರು. ಇದು ನೆತ್ತರು.
ಇದರ ವಾಸನೆ ನೋಡು !
ವಿಧವಿಧದ ವಾಸನೆಗಳ ಪ್ರಯೋಗ ಶಾಲೆ,
ವಿಲಕ್ಷಣ, ವಿಚಿತ್ರ ಕಂಪುಗಳ ಧರ್ಮಶಾಲೆ
ನಿನ್ನ ನಾಸಿಕವಾಗಲಿ.
ನೀನೆ ನಿನ್ನ ನಾಸಿಕವಾಗು.
ನಿನಗೇನು ?
ನಿನ್ನ ನಾಸಿಕವೊಂದು ಚಿರಂತನವಾಗಲಿ.
ನಿನ್ನ ಮೂಗೇ ಮೇಲಾಗಲಿ !
ಜಗತ್ತೆಲ್ಲ ಮುಳುಗಿದರೂ
ನಿನ್ನ ಮೂಗೊಂದು ತೇಲುತಿರಲಿ !
ನಿನ್ನ ಮೂಗಿಗೆಂದು ತೋಟಗಳಲ್ಲಿ
ಹೂಗಳು ಮಾಳಿಯ ರಕ್ತಾಣುಗಳಂತೆ
ಸುರಿದಿವೆ.
ನಿನ್ನ ಮೂಗಿಗೆಂದು ಕಾರ್ಮಿಕ ಕಾರ್ತವೀರ್ಯರ
ಹತವೀರ್ಯ ಕರಗಳು ಬಿರಿದಿವೆ.
ನಿನ್ನ ಮೂಗಿಗೆಂದು ವಾಗೀನುಗಳ ಪರಿದಾಟ.
ನಿನ್ನ ಮೂಗಿಗೆಂದು ಹಸಿರು ನೋಟುಗಳ ವಹಿವಾಟ.
ನಿನ್ನ ವ
ನಿನ್ನ ವ ... ೋಗ್ಯ !
ನಿನ್ನ ವ
ತನ್ನ ಕ

ನಿನ್ನ ಮೂಗಿಗೆಂದು ಫ್ರಾನ್ಸು
ತನ್ನ ತರುಣಿಯರನೆಲ್ಲ ಕಾಡಿತು.
ಆದರೂ ನಿನ್ನ ಮೂಗಿಗೆ ಮುಕ್ತಾಯವಿಲ್ಲ!
ಐಫೆಲ್ ಟಾವರದ ಹಾಗೆ
ಏಕಮೇವವಾಗಿದೆ ನಿನ್ನ ಮೂಗು!
ತಾಮಸಿಕ ನಿದ್ರೆಯಲ್ಲಿ ಸಹಸ್ರಾವಧಿ ಜನವನ್ನು ನುಂಗುವ
ಕುಂಭಕರ್ಣನ ಮೂಗು!
ಓ ಮೂಗೇ! ನಿನ್ನನ್ನು ನೋಡಿ
ಜಗವೆಲ್ಲ ಮೂಗು ಮುರಿಯಿತು
ನಿನಗೆ ಸರಿಯಾದ ಮೂಗುತಿಯೆಲ್ಲಿ?

* * *

ಈ ಕವಿತೆಯನ್ನು ಮೂಸಿನೋಡಿ
ಮೂಗಿನ ಹೊರಳೆಗಳರಳಿದವು.
ಗ್ರಹಣ ಹಿಡಿದ ಘ್ರಾಣೇಂದ್ರಿಯಕ್ಕೆ
ವಿಮೋಚನೆ ಬಂತು.
ಒಂದರ ಹಿಂದೊಂದು ಚಟಚಟ ಸೀನುಗಳು ಬಂದವು.
ಅನುನಾಸಿಕ ದನಿಯೊಂದು ಆ
ಹೆಮ್ಮೂಗಿನೊಳಗಿಂದ ಬಂತು:— ....
'ಓ ಕವಿಯೆ! ಚಿಂತೆಯಿಲ್ಲ!
ನೀನೆ ನನ್ನ ಅಂಬ್ಯಾಲ ಚಿಟ್ಟೆಯಾದೆ!
ಗಮಗಮಿಸುವ ಎಲ್ಲ ವಾಸನೆಗಳನನುಭವಿಸಿ
ನಾನು ಜೀವನ್ಮೃತನಾಗಿದ್ದೆ. ....
ನಂದನಗಳೆಲ್ಲ ಸ್ಮಶಾನಗಳಾಗಿದ್ದವು.
ಹೂವುಗಳೆಲ್ಲ ಹಾವುಗಳಾಗಿದ್ದವು.
ಖಸ್‌ಖಸ್ ಬರಿ ರಸಕಸಿಯಾಗಿತ್ತು.
ನೀನು ತುಂಬಿದ ತಂಬಾಕು ಪುಡಿಯಿಂದ
ಚೇತರಿಸಿಕೊಂಡೆ!

ಹೊಳೆಗಳರಳಿದವು.
ಹೊಸ ಅನುಭವ ಬಂತು.
ಇದಕಾಗಿ ಕತ್ತರಿಸೂ ಚಿಂತೆಯಿಲ್ಲ!
ಬೆಂಗಳೂರು, ಮಂಗಳೂರು, ಮದ್ರಾಸು!
ಇನ್ನೂ ವೈವಿಧ್ಯವಿದೆ ಜಗತ್ತಿನಲ್ಲಿ!
ಚಿಂತೆಯಿಲ್ಲ!'

# ತೋಳಪ್ಪ

ಅರವು ಮರವಿನ ವಯವು ;
ತಿರುವುಮುರುವಿನ ಮನವು ;
ಮುದಿತನದಿ ಹರೆಬಂದು ಹರಿದಾಡುವಿ.
ರತಿಕಾಮರಾ ಜೋಡಿ—
ಯಂತೋಣಿಗಳ ಸುತ್ತಿ
ಕಲಪು ಹಚ್ಚಿದ ಮೀಸೆಗಳ ತೀಡುವಿ !

ರತಿಯು ಸತಿಯಹುದೇನೋ !
ಸುತರು ನಿನ್ನ ವರಹುದೆ ?
ನಿನ್ನ ಮುದ್ರೆಯನವರ ತಲೆಯ ಮೇಲೊತ್ತಿ
ವಿಷವೃಕ್ಷದಂತೆ ತಲೆ-
ಯೆತ್ತಿ ನಿಂತಿಹೆಯಯ್ಯ
ವಿಷಬೀಜಗಳನವರ ಮನದಿ ಬಿತ್ತಿ !

ಓರ್ವ ಸಂಸ್ಥಾನಿಕನ
ಹುಜರಿಯಾಗುತ ಬೆಳೆದು
ನೀನೇ ಹುಜೂರೆಂದು ಭಾವಿಸಿರುವೆ.
ಅವನಂತೆ ಸಡಿಲುಹಣ
ಹುಟ್ಟಿಸುವ ಯುಕ್ತಿಗಳ
ಹಗಲಿರುಳು ಹೂಡಿ ಹರಿಹಾಯುತಿರುವೆ !

ಇಂದು ನಿಬ್ಬಣದೂಟ.
ಬಿಲ್ ಎದುರು ಬರೆ ಮಬ್ಬು !
ಸಾಲವನು ಮತ್ತಾರಿಗೇನೊ ಕಟ್ಟಿ
ನೀ ನಿರುಂಬಳನಿರುವಿ.
ಬೆರಗುಗೊಂಡನು ಯಮನು
ನಿನ್ನ ಗೈಮೆಗಳವನ ಕಿವಿಯ ಮುಟ್ಟಿ !

ಗುರುವಾರ ಗುರುಭಜನೆ.
ಶುಕ್ರವಾರಕೆ ಪೂಜೆ.
ಶನಿವಾರ ಯಾವನಿಗೊ ಬಂದಿವಾಸ!
ರವಿವಾರ 'ಉಪವಾಸ'
ಸೋಮವಾರಕೆ ಖೂನು.
ಧರ್ಮದೊಡಲನೆ ವ್ಯಾಪಿಸಿತ್ತು ಮೋಸ!

ಬ್ರಹ್ಮರಾಕ್ಷಸ ನೆಲಿಸಿ-
ದಶ್ವತ್ಥ ವೃಕ್ಷವದು
ನೀನಲ್ಲದಿರೆ ಮತ್ತೆ ಬೇರೆ ಏನು?
ಕ್ರಿಮಿರಾಶಿಯಲ್ಲೊಂದು
ಕ್ರಿಮಿ, ನಿನಗೆ ಭ್ರಮೆಯಿಹುದು:
ನೀನೆ ಲಕ್ಷ್ಮೀಪುತ್ರ, ಪಾರ್ವತಿಯ ಸೂನು!

ಸರ್ವಜ್ಞ! ನೀನಲ್ಲ-
ದಿನ್ನಾರು? ಮರ್ಮಜ್ಞ
ನೀ ಬಲ್ಲೆ ಯಾರ ಅಡಿಯಳುಕು ಎಲ್ಲಿ!
ನಿನ್ನಂಥ ಎದೆಗಾರ-
ನಿಗೆ ನಗರವಿದು ಕಿರಿದು.
ಸುಖಿಯಿರುವೆ ರೋಮ-ಬರ್ಲಿನ್ನಿನಲ್ಲಿ!

ಒಳ್ಳಿತನವೊಂದು ತೆರೆ,
ಸಂಪ್ರದಾಯವು ನೀತಿ,
ಧರ್ಮವಿನ್ನೊಂದು ಅನುಕೂಲ ಸೋಗು.
ಯಾರೇನು ಬಯಸುವರೊ
ಅವರಿಗದೆ ವರದಾನ,
ಏನೇನು ಬೇಕಿಹುದೊ ಎಲ್ಲವಾಗು!

ನೆನಪಿರಲಿ. ಅದರಗುಂ-
ಚಿಯಲಿದ್ದ ಹನುಮಪ್ಪ
ಮುಗಿಲುದ್ದ ಬೆಳೆವುದೆಂದೆಂದನಂತೆ.
ಅವನ ತಲೆಯೊಳಿನಟ್ಟ
ಹಾರಿಕೋಳಿನ ಕಂಡು
ತಿಳಿಯುವದಕಿಂದಿಗೂ ನೆರೆಯುವದು ಸಂತೆ!

# ಕ್ಲೋರೋಫಾರ್ಮ್

" ಒಂದು.
ಎರಡು.
ಮೂರು !
ಆಂ? ಏನೆಂದಿರಿ?
ನನ್ನ ಹೆಸರೆ?
ನನ್ನ ಹೆಸರು ಸತ್ಯಶೋಧಕ, ಎಂದು.
ನನ್ನ ಹೆಸರು ಸೌಂದರ್ಯಾರಾಧಕ, ಎಂದು.
ಕಲ್ಯಾಣಬೋಧಕ, ಎಂದು.
ಪ್ರೇಮೋದಕ, ಎಂದು.
ಶಕ್ತಿಸಾಧಕ, ಎಂದು.
ಹೆಸರು....ಹೆಸರು....ಹೆ...ಸ....ರು !
ಹೆಸರಿನಲ್ಲೇನಿದೆ?
ಒಂದು. ಎರಡು.
ಮೂರು. ನಾಲ್ಕು.
ಐದು. ಆರು....ಹೌದ್ದು, ಆರು. ಏಳಲ್ಲ. "

ದೇಶ ?
ಸತ್ಯಾಗ್ರಹದ ದೇಶ.
ಇನ್ನು ಮುಂದೆ ಶ್ರಮಜೀವಿಗಳ ದೇಶ.
ಜಗತ್ತೇ ನನ್ನ ದೇಶ.
ಕವಿಗಳ ದೇಶವದು,
ಪ್ರವಾದಿಗಳ ದೇಶ.
ಸಂತರ ದೇಶ,
ತಾಂತ್ರಿಕರ ದೇಶ.

ಹೇಳ ಹೆಸರಿಲ್ಲದ ದೇಶವದು,
ಇಂಡಿಯ ದೇಶ!
ಕೈ ಮೊಸರು, ಬಾಯಿ ಕೆಸರು.
ತಿರುವು ಮುರುವು ದೇಶ!
ಏನು ನನ್ನೆಣಿಕೆ ತಿರುವುಮುರುವೆ?
ಇಲ್ಲ, ಇಲ್ಲ, ಕೇಳಿರಿ ಬೇಕಾದರೆ!
ಒಂದು, ಎರಡು ಮೂರು.
ನಾಲ್ಕು, ಐದು, ಆರು.
ಏಳು, ಎಂಟು, ಒಂಬತ್ತು, ಹತ್ತು,
ಹತ್ತು!"

ಏನು? ಹತ್ತರಗೂಡ ಹನ್ನೊಂದೆ?
ಇಲ್ಲ, ಇಲ್ಲ.
ಹತ್ತರಗೂಡ ಇನ್ನೊಂದು,
ಅಂದರೆ ಹನ್ನೊಂದು!
ನನಗೆಲ್ಲ ಗೊತ್ತು.
ಏನು? ಸತ್ಯದ ಹೆಸರಿನಲ್ಲಿ
ರಕ್ತದ ಕಾಲುವೆ ಹರಿಸುವೆನೆ?
ಸೌಂದರ್ಯವನು ಮುಂದೆ ಮಾಡಿ
ಬೆಂತರ ಬೂದಿಯನ್ನೂದುವೆನೆ?
ಪ್ರೇಮವನ್ನು ಕಾಮವಾಗಿಸುವೆನೆ?
ಕಲ್ಯಾಣವೆಂದು ಬಡಬಡಿಸಿ
ಅಕಲ್ಯಾಣಕ್ಕೆ ಮಾರುಹೋದೆನೆ?
ಶಕ್ತಿಯ ಉಪಾಸಕನಾಗಿ
ಅಸುರರ ಪದವಿಯನ್ನು ಮೀರಿದೆನೆ?
ಏನಿದು ಮಾತು!
ಎಂಥವನಿಗೆ ಏನೆನ್ನುವಿರಿ?

ಕಂಡದ್ದನ್ನಾಡಿದರೆ ಕೆಂಡದಂಥ ಸಿಟ್ಟೆ?
ಇಲ್ಲ .... ಇಲ್ಲ .... .... .... ಇಲ್ಲ!
ಹೀಗೆಂದ ನಿಮ್ಮನ್ನು ಮೊದಲು ಸುಡಿಸಿ ಕೊಳ್ಳುವೆನು!
ಆಮೇಲೆ ಸತ್ಯ!
ಆ ಬಳಿಕ ಸೌಂದರ್ಯ!
ಆನಂತರ ಕಲ್ಯಾಣ!
ತದನಂತರ ಪ್ರೇಮ!
ಇಲ್ಲಿದೋ!
ತುಂಬುಹಳದಿ ವರ್ತುಲವೊಂದು
ಅಗಲವಾಗಿ ವಿಶ್ವವನ್ನೇ ವ್ಯಾಪಿಸುತ್ತಿದೆ.
ಅದರೊಳಗೊಂದು ಬಯಲು.
ಬಯಲಿನಲ್ಲಿ ಮಾಂಸಲ ಚಂಡೊಂದು ಬಿದ್ದಿದೆ.
ಅದೇ ನಿಮ್ಮ ಮೆದುಳು.
ಅದನ್ನೇ ಹಿಚುಕುತ್ತೇನೆ!
ಒಂದು, ಮೂರು, ಎರಡು!
ನಾಲ್ಕು, ಆರು, ಎಂಟು!
ಹತ್ತು! ಹ ... ತ್ತು! .... .... !"

ಕೊನೆಗೊಮ್ಮೆ ರೋಗಿಯು
ನಿಶ್ಚೇಷ್ಟಿತನಾದುದನ್ನು ನೋಡಿ
ಹತ್ತಿರ ನಿಂತಿದ್ದ ಅವಿದ್ಯಾಮಾಯೆಯೆಂಬ ದಾಯಿ
ನಸುನಕ್ಕು ಕೃತಕೃತ್ಯಳಾದಳು.
ಇನ್ನು ದೈವವೆಂಬ ಶಸ್ತ್ರಜ್ಞನಿಂದ
ಶಸ್ತ್ರಕ್ರಿಯೆಗೆ ದಾರಿಯೆಂದಳು.
ಜಗತ್ತೇ ರುಗ್ಣಾಲಯವಾಗಿದೆ.
ಒಂದೊಂದು ಜೀವವು ಒಂದೊಂದು ಆದರ್ಶವನ್ನು
ಕಾಣುತ್ತಿದೆ.

ಹೀಗೆ ಕಾಣುವ ಜೀವಜಾತಕ್ಕೆಲ್ಲ
ಅಹಮಹಮಿಕೆಯ ಸೂಕ್ಷ್ಮ ರೋಗ ಹಿಡಿದಿದೆ.
ಈ ಕಣ್ಣಿನ ಪರಿ ಬಿಡಿಸಲು
ಶಸ್ತ್ರಕ್ರಿಯೆಯೇ ದಾರಿ.
ಇದಕಾಗಿ ರೋಗ ಬಲಿಯಬೇಕು,
ತಾತ್ಪೂರ್ತಿಕ ಮೃತ್ಯುವಾಗಬೇಕು!
ಆ ಮೃತ್ಯುದಾಯಿನಿಯೇ ನಾನು,
ಅವಿದ್ಯಾಮಾಯೆಯೆಂಬ ದಾಯಿ!

# ಬರ್ನಾರ್ಡ್ ಶಾ:ನನ್ನು ನೆನೆದು :

" ತೀರಿದನೇ ? ಒಳಿತಾಯಿತು !
ಬೇಡ ಆ ವಿದೂಷಕ.
ಆಯ್ತು ನಮ್ಮ ದಿನದ ಬಾಳು
ವಿಡಂಬನೆಗೆ ಪೋಷಕ.
ಕಾಲನೆ ಮಾರ್ಜಾಲ. ನಿಮ್ಮ
ಶಾಃ ಬರಿಯ ಮೂಷಕ "
ಅಂಧಜನತೆಯೊರೆಯುತಿಂತು
ಕತ್ತಲಲ್ಲಿ ಮುಳುಗಿತು.
ತಾರೆಯಂತೆ ಶಾಃನ ಜೀವ
ಸ್ಮೃತಿಪಟಲದಿ ತೊಳಗಿತು.

" ಯೋಧ ಬಂದು ಪಣ ತೊಟ್ಟನು.
ಆವನ ಹಿಂದೆ ನಡೆದೆವು.
ಕ್ರಾಂತಿವೀರ ! ಓ ! ಪ್ರವಾದಿ !
ಅಸಮ ಸುಖವ ಪಡೆದೆವು
ನಿನ್ನ ಜೊತೆಗೆ. ಈ ಸಮಾಜ-
ದೆಲ್ಲ ಕೊಳೆಯ ತೊಡೆದೆವು.
ಇನ್ನು ನೇತೃವಾರು ? " ಎಂದು
ಬುದ್ಧಿನಿಷ್ಠರೊರೆಯಲು
ಒಳಗೊಳಗೇ ಇತ್ತು ಕಿರಣ, —
ಅವರ ಹೃದಯ ತೆರೆಯಲು.

ಆದಿಪ್ರಕೃತಿ ನೊಂದೆಂದಳು :
" ನನ್ನ ಕರುಳ ಬಗೆದು

ತೆಗೆದ ರತ್ನ-ವೈಢೂರ್ಯವ,
ದೂರ ದೂರ ಒಗೆದು
ಸಿಂಗರಿಸಿದೆ ಬಾಂಬಯಲನು :
ಮನೆಗೆ ಬಂದ ಜ್ಯೋತಿ :
ತ್ಯಾಜ್ಯ ಜನಕೆ. ಅವರ ವ್ಯಾಖ್ಯೆ-
ಯಹುದು : ನೇತಿ ! ನೇತಿ !
ಇನ್ನೊಂದಿದೊ ! ಬುಧನ ಜೊತೆಗೆ
ಬಾಳಬಲ್ಲ ಗ್ರಹವು !
ಅದರ ಪ್ರಭೆಯೊಳೆಂಥ ಚೆಲುವ
ಮೂರ್ತಿಯು,— ಭಂಜಿತವು !
ಆ ವಿಮರ್ಶನದ ಖತವನು
ನೀನರಗಿಸಬಲ್ಲೆಯಾ ?
ಅಂದೇ ವಿಷವಮೃತ, ಮನುಜ
ದೇವ, ಮೀರಿ ಎಲ್ಲೆಯ ! ”

# ಇಲ್ಲ

ಕಾಮಣಿಗಣ್ಣಿಗೆ ಎಲ್ಲವೂ ಹಳದಿಯಾದಂತೆ
ಕವಿಯ ಕಣ್ಣಿಗೆ ಬರಿ ಹಸಿರಾಗಿ ತೋರುತಿದೆ ಈ ತೋಟ.
ಅಲ್ಲಿ ನೀರಂತೆ ಹಣಿಸಿದ ಮಾಳಿಯ ರಕ್ತವನ್ನು
ನೋಡುವ ಕಣ್ಣೇ ಇಲ್ಲ!

ವಿಯದ್ರಂಗದಲ್ಲಿ ವಿಹಂಗಮದಂತೆ ಹಾರಿ
ಜೇನ್ನೊಣದಂತೆ ಜೊಂಯ್ಗುಡುತಿರುವ ವಿಮಾನವದೋ!
ಆದರೆ ಅದನ್ನು ರಚಿಸಲು ಹೋಗಿ ಕುರುಡಾದವರ
ಕ್ರಂದನವ ಕೇಳುವ ಕಿವಿಯೇ ಇಲ್ಲ!

ಕಡಲ ಬಿತ್ತರದಲ್ಲಿ ನಗರದಂತೆ ತೇಲುತ್ತಿರುವ
ಹಡಗವಿದೋ! ಆದರೆ ಎಂಜಿನ್ನೋಣೆಗಳಲ್ಲಿ
ನೌಕಾಯಂತ್ರದ ಬಳಿ ಬೆಂದು ಬೂದಿಯಾಗುತ್ತಿರುವ
ಪೇದೆಯನ್ನೆತ್ತಿ ತಬ್ಬುವ ಕೈಯ್ಯೇ ಇಲ್ಲ!

ಭಂಗಿ ತನ್ನ ಕೆಲಸ ಮುಗಿಸಿ ಮನೆಯೆಡೆಗೆ ತೆರಳುವಾಗ
ಮೂಗು ಮುಚ್ಚಿಕೊಳುವವರುಂಟು.
ಇಂಥ ಹೇಸಿಕೆಯಲ್ಲಿಯೂ ಉಳಿಸಿಕೊಂಡ ಶೀಲದ ನರುಗಂಪನ್ನು
ಮೂಸಿ ನೋಡುವ ಮೂಗೇ ಇಲ್ಲ!

ಮನೆಯಲ್ಲಿದ್ದ ಷಡ್ರಸಗಳನ್ನು ಸಪ್ಪನ್ನ ಸಾರೆಂದು ತ್ಯಜಿಸಿ
ಇನ್ನೊಬ್ಬರ ಮನೆಯ ಪಳದೆಗೆ ನೀರು ಬಿಡುವ ನಾಲಗೆಗಳುಂಟು.
ಆದರೆ ಅನ್ಯರ ಮನೆ–ಮನಗಳ ಕಹಿಯನ್ನು ಸಹಾನುಭೂತಿಯಿಂದ
ರುಚಿನೋಡುವ ಜಿಹ್ವೆಯೇ ಇಲ್ಲ!

ಇಲ್ಲ! ಇಲ್ಲ! ಇಲ್ಲ!
ಐಂದ್ರಿಯಕ ಜೀವನಕ್ಕೆ ಇಂದ್ರನ ಹಿರಿಮೆಯಿತ್ತುದುಂಟು.
ಆದರೆ ಅದನ್ನು ಬುದ್ಧಿಯಲ್ಲಿ ಕೇಂದ್ರೀಕರಿಸುವ ಹವಣಿಲ್ಲ.
ಬುದ್ಧಿಯನ್ನು ಗರುಡಪಕ್ಷಿಯಂತೆ ಉಡ್ಯಾಣಿಸಲು ಬಿಟ್ಟುದುಂಟು.
ಆದರೆ ಗರುಡವಾಹನನಂತೆ ಅದನೇರುವ ಗುರಿಯೇ ಇಲ್ಲ.
ಇಲ್ಲ! ಇಲ್ಲವೇ ಇಲ್ಲ!

# ರೇಡಿಯೊ

ಕಾಡಿಯೋ, ಬೇಡಿಯೋ,
ತೆಂದೆ ನಿನ್ನ, ರೇಡಿಯೊ!
ಮನೆ ತುಂಬಿಸಿಕೊಂಡ ಸೊಸೆ,
ಇಲ್ಲಿದೆ ಬಾ, ಹೀಗೆ ಹಸೆ!
ಹೇಳು ನಿನ್ನ ಕಥೆಯ ಹೇಳು,
ರಸಮಯವಾಗಿರಲಿ ಬಾಳು.
ಮನೆಗದೊಂದು ಹೊಸತು ಹೊಗರು,
ಎದೆಬಳ್ಳಿಗೆ ಹೊಸತು ಚಿಗುರು,
ಕಿರಿಯರ ಹುರಿದುಂಬಿಸು,
ನಮ್ಮೆದೆ ಮನತುಂಬಿಸು.
ಅಲೆಯಂಚೆಯ ಕಾಸಾರ,
ಹೊಸ ರಕುತದ ಸಂಸಾರ!
ನಂದಾದೀಪವಾದ ಮಿಂಚೆ,
ಕರ್ಣಾಮೃತದೊಳಸಂಚಿ!
ಮನೆ ತುಂಬಿಸಿಕೊಂಡ ಸೊಸೆ!
ಇಲ್ಲಿದೆ ಬಾ, ಹೀಗೆ ಹಸೆ!

ಯಾವ ಗಾನ? ಯಾವ ತಾನ?
ಸೊನೆ ಸುರಿವುದು ಸುಮ್ಮಾನ!
ಬೀಥೋವನ್ ಇಲ್ಲವೆ ಜಾರ್ಜ್,
ಒಪೆರದ ಮೇಳಗಳಿಂವಾಜ್!
ಉದಯರಾಗ, ದೀಪರಾಗ,
ಉತ್ತರ–ದಕ್ಷಿಣದ ಯೋಗ,
ಸಂಗೀತದ ಸಂಯೋಗ!

ಇದೊ ಮದ್ದಳೆ! ಜಲತರಂಗ,
ಅನುಪಮ! ಅನಂಗಸಂಗ!
ನಡುನಡುವಿನ ಕೊಳಲ ದನಿಯು,
ಕೇಳುತ ಬಳಿಸಾರ್ವನಿನಿಯ!
ಕ್ಲೇರಿಯೊನೆಟ್, ವಾಯಲಿನ್,
ಕೇಳಿ ಸಿದ್ಧ ಸಾಯಲಿನ್!
ಎನಿತು ವಿದ್ಯೆ ಜಾಣಿಗೆ,
ಆಕಾಶವಾಣಿಗೆ!
ಓ ವಿಜ್ಞಾನಿಯ ಕುವರಿ,
ರಸಿಕ ಜ್ಞಾನಿಗಳ ಗೌರಿ!

ಮತ್ತಿದೊ ಲಾವಣಿಯು, ಗೀತ.
ಓ! ಏನಿದು ವಿಪರೀತ!
ಫ್ರೆಂಚು, ತಮಿಳು, ರಶ್ಯನ್,
ಇಟ್ಯಾಲಿಯನ್, ಪ್ರಶ್ಯನ್!
ಲೋಕದೆಲ್ಲ ಭಾಷೆ,
ಓ! ಏನು ತಮಾಷೆ!
ನಿನಗಾರ್ ಕಲಿಸಿದರು?
ಮನವಿಂತೊಲಿಸಿದರು?
ಪ್ರಶ್ನೆಯೊಂದು ಸ್ಪ್ಯಾನಿಶ್:
ಉತ್ತರವದು ಡ್ಯಾನಿಶ್!
ಆಯಾ ನಾಡಿನಲಿ
ಹುಟ್ಟಿದ ವೋಡಿಯಲಿ,
ಮೆರೆಯುವೆ ನೀ ನುಡಿದು;
ಇರುವೆ ದಂಗುಬಡಿದು.
ಓ ವೀಣಾಪಾಣಿ,
ಭೂಲೋಕದ ವಾಣಿ,

ಜನ್ಮಸಿದ್ಧ ಕಲೆಯು,
ಇದಕಿಲ್ಲವು ನೆಲೆಯು!
ಮನೆ ತುಂಬಿಸಿಕೊಂಡ ಸೊಸೆ,
ಇಲ್ಲಿದೆ ಬಾ, ಹೀಗೆ ಹಸೆ!

ನಿನ್ನ ಚರ್ಚೆ ಎನಿತು ಮಧುರ!
ನಿನ್ನ ಮಾತದೆನಿತು ಚದುರ!
ಪುರುಷಾರ್ಥವು, ಚಮತ್ಕೃತಿ,
ವಿಜ್ಞಾನ, ಮೂಲ ಸಂಸ್ಕೃತಿ,
ಕಾವ್ಯ ಸಂಕಥಾ ವಿನೋದ,
ಶಾಸ್ತ್ರ, ಬಾಲಕರಿಗೆ ಬೋಧ,
ಪಾಕ, ಪೇಟೆ, ಆಟನೋಟ,
ಕ್ರಿಕೆಟ್‌ಪಟುವು ಓಡಿದೋಟ :—
ಎಲ್ಲ ಬಲ್ಲ ಯುವತಿ ನೀನು.
ನಿನಗೆ ತಿಳಿಯದಿಹುದದೇನು?
ಇನ್ನು ರಾಜಕಾರಣ,—
ಅದುವೆ ನಿನಗೆ ಹೂರಣ!
ಯೂನೋದ ತೋರಣ!
ಲೆಕ್ಕವಿಲ್ಲದನಿತು ಸಲ
ಮಾತನಾಡುತಿರುವೆಯುಲ!
ರಾಜ್ಯಘಟನೆ, ರಾಜ್ಯಕ್ರಾಂತಿ,
ಮಹಾಯುದ್ಧ, ಅಹಾ ಶಾಂತಿ!
ಹೊಸಕಾಲದ ಮಹಿಳೆ ನೀನು,
ಮತ್ತೆ ಮಾತನಾಡದೇನು!
ಮನೆ ತುಂಬಿಸಿಕೊಂಡ ಸೊಸೆ,
ಇಲ್ಲಿದೆ ಬಾ! ಹೀಗೆ ಹಸೆ!

ದನಿ-ದನಿಗಳು ಅಲೆದಲೆದು
ಮುಗಿಲಿನಲ್ಲಿ ಮಾರ್ಮಲೆದು
ಅಂತರ-ಬೆಂತರಗಳಂತೆ
ನೆರೆಯಿಸಿರಲು ಹಿರಿಯ ಸಂತೆ
ಕರ್ಣದ ಹವಣಾಚೆಯಿಂದ :—
ಬುದ್ಧಿವಂತ ನರನು ಬಂದ!
ಅವನು ವಿವೇಚನೆಯ ಬಗೆದು
ಮಂತ್ರಿಸಿರುವ ಮಿಂಚು ತೆಗೆದು
ಯಂತ್ರಿಸಿದೀ ಸೂಕ್ಷ್ಮ ಕಿವಿ,—
ಕಂಡು ತೂಣಗೊಂಡ ಕವಿ!
ಭೂದೇವಿಯ ಎದೆಯ ಮಿಡಿತ,
ಅವಳಣುಗನ ಉಡದ ಹಿಡಿತ,
ಎಲ್ಲಕೆ ಕಿವಿ ನೀಡುತ
ಕೇಳಿರುವದ ಹಾಡುತ,—
ಕರ್ಣವಿರಲು ಸೂಕ್ಷ್ಮತರ,
ಶ್ರಾವ್ಯ ಸೂಕ್ಷ್ಮತರದ ಸ್ವರ!
ಸತ್ಯವಿದನು ಸಂಧಿಸಿ
ಮನುಕುಲವನು ಹೊಂದಿಸಿ
ಮೆರೆಯುತಿರುವಿ. ಬಾ, ಬಾ, ಸೊಸೆ!
ಇಲ್ಲಿದೆ ಬಾ, ಹೀಗೆ ಹಸೆ!

ಹಾಡುತಿರು, ಮಾತನಾಡು.
ಮುನಿದು ಮೊಳಗಬೇಡ, ನೋಡು!
ಅಪಶಬ್ದವು, ಅಪಪ್ರಚಾರ,—
ಬೇಡ ಬೇಡ, ಅನಾಚಾರ!
ಸನಾತನರ ಸಂಸಾರ,—
ಇಲ್ಲವಿದಕೆ ಅಂತಪಾರ!

ಹೊಂದಲಿರುವ ನಮ್ಮ ಬಾಳು,—
ಮಾಡಬೇಡ ಇದನು ಹಾಳು!
ಕಲಹದ ದನಿಯೆತ್ತದಿರು.
ಸವಿಯಲಿ ವಿಷ ಬೆರಸದಿರು.
ನಿನ್ನ ಜಾಣೆದೆಲ್ಲ ವಿಫಲ,—
ಚಂಡಿಯಂತೆ ಹಿಡಿಯೆ ಛಲ!
ಸುಮಂಗಲೆ ಇಂದಿಹ ಕುಮಾರಿ,—
ಆಗಬೇಡ ಮುನಿದು ಮಾರಿ!
ಮನೆ ತುಂಬಿಸಿಕೊಂಡ ಸೊಸೆ!
ಇಲ್ಲಿದೆ ಬಾ, ಹೀಗೆ, ಹಸೆ!

# ಹಲವಳಿ

ಯುರ್ರ್ಯಾನಿಯಂ, ರೇಡಿಯಂ!
ಗೊತ್ತಿಲ್ಲದ ಧಾತು–ಲೋಹಗಳು
ಗುರುತಿಲ್ಲದ ಗುರಿಯೆಡೆಗೆ ನಡೆದಿವೆ.
ಕೆಲವು ಅಪಕಾರಿ, ಕೆಲವು ಉಪಕಾರಿ.
ಒಂದರಿಂದ ಅಣುಬಾಂಬು. ಇನ್ನೊಂದರಿಂದ ಪ್ರಕೃತಿಗಿಂಬು.
ಯಾವ ಸಾಹಸ? ಯಾವ ಹೊಂಚು?
ಯಾವ ನವೀನ ಸೃಷ್ಟಿ?

ಇಂತಿದು ನವಖಂಡ.
ಇಲ್ಲಿದೋ ಶಿಲಾಖಂಡ.
ಈ ಬೀದಿಗಲ್ಲ ತುಂಡಿನ ಮೇಲೆ
ಯಾವ ಮೂರ್ತಿ ಒಡಮೂಡಲಿದೆ?
ಒಬ್ಬನೆಂದ ಹಿಟ್ಲರ್.
ಇನ್ನೊಬ್ಬನೆಂದ ಸ್ಟಾಲೀನ್.
ಮತ್ತೊಬ್ಬನೆಂದ ಮಾವೋ.
ಮಗುದೊಬ್ಬನೆಂದ ಟ್ರೂಮನ್.
ಅಂತೂ ಗಾಳಿ ಕೊರೆದು
ಮಳೆಗರೆದು ಎರೆದು
ಬೆಂಗದಿರ ತಪಿಸಿ
ತಂಗದಿರ ತಂಪಿಸಿ
ಮೂಡಿಸಲಿಹರು ಮೂರ್ತಿಯೊಂದನ್ನು.
ಯಾವ ಮೂರ್ತಿ?

ಹೆಲಿಯುಳಿಯುವ ಬಾಣಂತಿಯಂತೆ ಹಲವಳಿದು
ಭೂಮಿತಾಯಿ ಹಾಸಿಗೆ ಹಿಡಿದಿದ್ದಾಳೆ.

ಒಂದೊಂದು ನಾಗರಿಕತೆಯ ಯುಗ
ಒಂದೊಂದು ಗರ್ಭಧಾರಣ.
ಆದರೆ ಜನ್ಮವಾಗುವ ಮೊದಲೇ ಗರ್ಭಸ್ರಾವ!
ಅಕಾಲ ಪಿಂಡವು ಒಮ್ಮೆ ಅಸ್ಪಷ್ಟ ಸಂತತಿ,
ಒಮ್ಮೆ ರಾಕ್ಷಸ,
ಒಮ್ಮೆ ಕಣ್ಣು ನಡುನೆತ್ತಿಗೇರಿದ ಪಿಶಾಚಿ!
ಯಾವ ಸನತ್ಕುಮಾರನ ಜನ್ಮ ಬಯಸಿ
ಭೂದೇವಿ ಹೀಗೆ ಬೇನೆ ತಿನ್ನುವಳು?
ಯಾವ ಆದೊಂದು ಉಳಿಯುವದೆಂದು
ಹೀಗೆ ಹಲವಳಿಯಲ್ಲು ಹಿಂದೆಮುಂದೆ ನೋಡಳು?

# ಕಾಲ—ಕವಿ

ಕಡಲ ತೀರದಲ್ಲದೊಂದು ತಾಜಮಹಲು ಹೋಟಲು,
ಕಾಲನವನೆ ಚಾಲಕನು : ತಿನಿಸು, ತಿಂಡಿ, ರೋಟಲು,
ಮೋಜು ಮೋಜು ಮೇಜವಾನಿ ರಾಜ, ರಾಜರಾಪ್ತರು,
ಎಲ್ಲರು ಬಹರಲ್ಲಿ ನಿತ್ಯತೃಪ್ತರು, ಅತೃಪ್ತರು !
ಬಡವರು, ಬಗ್ಗರು, ಕಗ್ಗರು, ಪಂತರು,
ಶುಕ್ರರು, ವಕ್ರರು, ಚಾಣಕ್ಯರು, ಸಂತರು :
ದೈವದಾಟದಲ್ಲಿ ತಮ್ಮ ಪಾಲಿಗಿರುವ ಎಲೆಯನು
ಕಂಡುಕೊಳಲು, ತಿಳಿದುಕೊಳಲು ತಮ್ಮ ತಮ್ಮ ಬೆಲೆಯನು !

ಬಂದನೊರ್ವ ರಾಜ,—
ಶರಟಿನೊಳಗೆ ಚಿಲಕತ್ತು :
ಬಲ್ಬು, ಬಲ್ಬು, ವಿದ್ಯುತ್ತು :—
ಸರವಿದವನ ತೇಜ !

ಅದರ ಬ್ಯಾಟರಿಯು, ಬಟನ್ನು
ರಾಣಿಯ ಕೈಯ್ಯೊಳಿದೆ.
ರಾಣಿಯ ತಲೆಗೂದಲಲಿ
ತೋಟವೊಂದು ಬೆಳೆದಿದೆ !

ಅದರೊಳೊಂದು ಹೂವನು
ಬಯಸಿ ಕೈಯ್ಯ ಚಾಚಿದ
ಕೊಳಗುಳಕೆನೆ ಮುನ್ನಡೆದಿಹ
ಯೋಧ—ತಲೆಯ ಬಾಚಿದ.

ಔದ್ಧತ್ಯಕೆ ಬೇಸತ್ತು
ಅವನ ಸೇವೆಯಾಳು
ಯೋಧನ ತಲೆಯುರುಳಿಸಿದ
ಮಾಡುತೆರಡು ಹೋಳು.

ಸಾರ್ಜಂಟನು ಬಂದು
ವಾಃರಂಟನು ತಂದು
ಆಳನು ಬಂಧಿಸಿದ.
ಜಡ್ಜಿಯು ಸಂಧಿಸಿದ.

ಆಗ ಸಾಕ್ಷಿ, ಸಹಿ, ಪುರಾವೆ,
ಕೋರ್ಟುಗಳಲಿ ನಡೆದು ದಾವೆ
ಇರದಿಹುದಿದೆ. ಇದ್ದುದಿಲ್ಲ.
ಕೆಳಗೊ? ಮೇಲೊ? ಶಿವನೆ ಬಲ್ಲ!

ಆಳಿನಣ್ಣ ಲಂಚಕೊಟ್ಟು
ಬಿಡಿಸುವನಕ ನಡೆಯಿತು.
ಹೋಟಲಿನೊಳಗೊಂದು ಸಂಜೆ
ಇನಿತು ಬಣ್ಣ ಪಡೆಯಿತು!

ಅಲ್ಲಿಯೊಂದು ಮೂಲೆಯಲ್ಲಿ ಪಿಳಿಪಿಳಿ ಕಣ್ಬಿಟ್ಟು
ಕುಳಿತಿರುವನು ಕವಿಯದೊಬ್ಬ ಕೈಗೆ ಗಲ್ಲವಿಟ್ಟು.
ಮುಗ್ಧ ಮೌನಿ, ಮಿತಭಾಷಿಯು, ತೀರ ಸಹಜ ಉಡುಪು!
ಮುಖಮುದ್ರೆಯು ಮಾತ್ರ ಕವಿಯುತಿತ್ತದೊಂದು ಒಡಪು!
ಕಾಲ ಬಂದ ಮಾಲಕನು ಇಲ್ಲವೆ ಚಾಲಕನು :
ತನಗೆ ತಾನೆ ಬೆರಗುಗೊಂಡ: ಯಾವನಿವನು ಶ್ಯಾಲಕನು!
ಬರುತಿದೆ, ಹೋಗುತಿದೆ, ಜನಸಂದಣಿ ದಿನವು,
ಹಿಗ್ಗುತಿದೆ, ಕುಗ್ಗುತಿದೆ ಸಾವಿರೊಂದು ಮನವು!

ತಿಂಬಲೊಲ್ಲ, ಉಂಬಲೊಲ್ಲ, ಮೂಲೆ ಹಿಡಿದು ಕುಳಿತು
ಪಿಳಿಪಿಳಿ ಕಣ್ಬಿಡುತಿರುವನು : ಕೇಳಿ ತಿಳಿವುದೊಳಿತು !

ಕಾಲ ಬಂದು ಕೇಳಿದನು : ಯಾರು ನೀವು, ಸ್ವಾಮಿ ?
ಕವಿಯೆಂದನು : ನಿರುಪದ್ರವಿ, ನಿರಪೇಕ್ಷಿ ಅಸಾಮಿ !
ಕಾಲನೆಂದ : " ರಾಜರು, ಅಧಿರಾಜರು, ಮಂತ್ರಿಗಳು,
ಲಕ್ಷ್ಮೀಪುತ್ರರು, ಪೌತ್ರರು, ಯೋಧರು, ತಂತ್ರಿಗಳು,
ಸುಂದರಿಯರು, ಚಪಲೆಯರು ವಿಧವಿಧ ನಾರಿಯರು
ಬೇಡಿ, ಬಯಸಿ ಉಣ್ಣಲೆಂದು ಇಲ್ಲಿಗೆ ಬಳಿಸಾರಿಹರು !
ಇಲ್ಲಿ ನಿಮ್ಮದೇನು ಕೆಲಸ? " ಕವಿ ನಕ್ಕನು ಮಧುರ :
" ಒಂದು ಗಳಿಗೆ ಮೋಜು ನೋಡಲೆಂ " ದು ನುಡಿದ ಚದುರ.
" ಕೆಲಸವೆಂದು ಮೇಲೆ ಬಿದ್ದು ಎಲ್ಲರು ಹಾಯ್ದಾಡಿ
ಪುರಸತ್ತಿಲ್ಲದೆ ಸಾಯ್ವುದ ಗಾಸಿಗೊಂಡು ನೋಡಿ
ನಿರುಂಬಳನು, ನಿರುಪಾಧಿಯು, ಒಂದು ಗಳಿಗೆ ನಿಂತು
ಜೀವಕೋಟಿ ಹೂಡಿದ ನವರಸ ನಾಟಕವೆಂತು
ರೂಪಗೊಳುವದೆಂಬುದನ್ನು ಕಾಂಬುದೆಂದು ಬಂದೆ .... "
ಕಾಲನೆಂದ : " ಬಡಬಡಿಸುವಿ ! ನೋಡು ಹಿಂದೆಮುಂದೆ !
ಅಲಸಿಗಳ ತವರಿದಲ್ಲ, ವೈಗಳ್ಳರ ತಾಣವು,
ಎಲ್ಲಿವರೆಗೆ ದೇಹದಲ್ಲಿ ದಣಿದಣಿಸಿದೆ ಪ್ರಾಣವು
ಅಲ್ಲಿತನಕ ಏನದೊಂದು ಕಜ್ಜವ ಕೈಕೊಳ್ಳದಿರೆ
ಇಲ್ಲಿ ಪ್ರವೇಶವು ದೊರೆಯದು. ಮೋಜುಕಾಂಬ ಮನವಿರೆ
ನಾಟ್ಯಶಾಲೆಯಲ್ಲವಿದು .... " ಕಾಲನನ್ನು ತಡೆದು
ಕವಿಯೆಂದನು ಕಿಸೆಯೊಳಗಿನ ನೋಟುಬುಕ್ಕು ಹಿಡಿದು :—
ಇಲ್ಲಿದೋ ! ಪ್ರವೇಶಕೆಂದನಂತ ಕೊಟ್ಟ ಪಾಸು !
ಅರಿಯೆ ನೀನು, ಆ ಅನಂತನೆದುರಿನ ಮೊಲೆಗೂಸು !
ಮತ್ತೆ ನನ್ನ ಕಜ್ಜವಿದು : ಈ ಹೋಟಲನೆಂತು
ನಡೆಸಿಹೆ ನೀನೆಂಬುವದನು ಇಲ್ಲಿ ತಂಗಿ ನಿಂತು

ವರದಿಯನೊಪ್ಪಿಸಲೆಂದು ವರದ ನನ್ನ ಕಳಿಸಿದ.
ಮನ್ವಂತರ ಬೇಕೆ? ಎಂದು ನಡುನಡುವೆಯೆ ಬೆಸಸಿದ!
ಅಣುಬಾಂಬನು ಸಿದ್ಧಗೊಳಿಸಿ ಪ್ರಳಯದೂಟಕೆಂದು,
ಮನುಕುಲವನೆ ಆಮಂತ್ರಿಸಿ ಸಾವಿನಾಟಕೆಂದು
ಹೋಟಲಿನಲಿ ರಂಗೇರಿದೆಯೆಂದೀಗಲೆ ಬರೆದು
ಮಾರುತ್ತರವನು ಕಾದಿಹೆ ಭೀತಿಯನ್ನು ತೊರೆದು."

ಕಾಲಪುರುಷನಟ್ಟಹಾಸ ದಿಗ್ದಿಗಂತಕೇರಿತು.
ಕವಿಯು ಬಲ್ಲ ತನ್ನ ಗುಟ್ಟನೆಂದೆದೆಯುಕ್ಕೇರಿತು.
ಕೈನೀಡುತ ಕಾಲನೆಂದ: "ಓ ಕವಿ, ಸುಸ್ವಾಗತ!
ಅನ್ಯಾದೃಶನಯ್ಯ ನೀನು, ನಚ್ಚಿನ ಅಭ್ಯಾಗತ!
ಅಂಕುಪಡದೆ ಬೀಳುತಿದೆ! ನೇಪಥ್ಯದಿ ಗಂಟೆ
ಬಾರಿಸುತಿದೆ. ರಂಗೇರಿದೆ. ಇಂಥ ಸಮಯ ಉಂಟೆ?
ಅಣಿಗೊಳಿಸುತ ಹೊಸಹೊಂಚನು ಮುಂದನಂತನೆಂತು
ಹೋಟಲು ನಡೆಯಿಸುವುದೆನ್ನುವ, ನೋಡುತಿಹೆನು ನಿಂತು.
ನಾ ನಾಟಕ ಸೂತ್ರಧಾರ. ಕುಣಿಯುತಿಹವು ಗೊಂಬೆ,
ಚಿನ್ಮಯದಾ ಜೀವಕಳೆಯ ತುಂಬುವನಕ ಜಗದಂಬೆ.
ಅಗಾಧ ದೃಶ್ಯವಿದನು ಕಾಂಬನಿಲ್ಲವೆಂಬ ಕೊರತೆ
ತುಂಬಿತಿಂದು. ನೀನಂತಸಾಕ್ಷಿಯಿಹುದನರಿತೆ.
ಅನಂತಚಿತ್ತ ಸಂಕಲ್ಪಿಸಿದಂಥ ಗತಿಯ ಹಿಡಿದು
ರೂಪಿಸುವೆನು ರಾಗ–ಭೋಗ ನೋಡು ಹಸಿಯು ಮಿಡಿದು!"

# ಶೂನ್ಯ

ಸೀಳುತಿದೆ, ಬೀಳುತಿದೆ, ಹೂಳುತಿದೆ, ನೋಡು!
ಕಡಲ ತೀರ!
ಬಿದ್ದು ಹೋಳಾಗುತಿದೆ, ಹಾಳಾಗುತಿದೆ, ಇಲ್ಲ
ಅಂತಪಾರ.
ಗೊತ್ತಿಲ್ಲ, ಗುರಿಯಿಲ್ಲ, ಸದ್ದಿಲ್ಲದಿಹ ಹೋಮ,—
ಓ ಘನಘೋರ!

ಸಿಲೆಯೊಂದು ಬೀಳುತಿದೆ ಸಾಗರದಿ ಅದರ ಮೇಲೆ
ಒಂದು ಹಣೆಗಣ್ಣು.
ಸಸಿಯೊಂದು ಇಳಿಯುತಿದೆ. ಅದರ ಕೇಸಿರೆಲೆಯ ತುಂಬ
ಕುಣಿವ ಹೆಣ್ಣು;
ಜಾರಿ ರೆಂಬೆಯ ನಂಬಿ ಕುಳಿತಿರುವ ಮನದ ಮಂಗ
ನೋಡುತಂಗೈಯ್ಯ ಹುಣ್ಣು.

ಫೈಡಿಯಾಸನ ಶಿಲ್ಪ ಬಿತ್ತು: ಬಿದ್ದಿತ್ತು ಹೊರಳಿ
ಮೆರೆವ ಪಿರಮೀಡು:
ಲೋಭಾನ ದ್ರವ್ಯದಲಿ ಹೂತಿಟ್ಟ ಮಮಿಗಳಂತೆ,—
ಏನು ಪಾಡು!
ನಗರಗಳು, ದೇಶಗಳು, ಖಂಡಗಳು ಕಳೆದು ಹೋಗಿ
ಕಳೆಯುವೊಲು ಮುಳುಗು-ಮೂಡು!

ಒಂದು ಸುಳಿಯಲಿ ರಾಮ, ಇನ್ನೊಂದರಲ್ಲಿ ಕೃಷ್ಣ,
ಹರ್ಕ್ಯುಲೀಜ;
ಸುತ್ತುಗಟ್ಟಿತು ಮಡುವು ಸೀಜರನ, ಸಮ್ರಾಟರ,—
ಎಲ್ಲಿ ತೇಜ?

ಯಾವ ಸಂಸ್ಕೃತಿಯಿರಲಿ, ನಾಗರಿಕತೆಯೆ ಇರಲಿ,
    ಮುಳುಗು ಸಾಜ.

ಕಾಲೋದಧಿಯ ಕ್ಷಾರಜಲದ ಗಂಭೀರ ಮೊಳಗು,—
    ಅರಿದು ದೈನ್ಯ.
ಅರಿದರಿದು ಕರುಣೆ—ಕನಿಕರವದಕೆ. ಅದರ ಮೂಲ
    ಭವ್ಯ ಶೂನ್ಯ!
ಕಟ್ಟುತಿಹ ಮನುಕುಲಕೆ ಮೆಟ್ಟುತಿರುವೀ ಶಕ್ತಿಗೆ
    ಕದನವನ್ಯೋನ್ಯ!

ಮೀನಗಳು ಮಾನವರ, ಮೊಸಳೆಗಳು ಗುಂಪುಗಳನು,
    ತಿಮಿಂಗಿಲ,—ದೇಶವ
ನುಂಗುತಿವೆ. ಇತರ ಹಿಂಸ್ರಕ ಪ್ರಾಣಿ ತುಂಬಿ ಕಡಲ
    ಗರ್ಭಕೋಶವ;
ಧಾರುಣಿಯ ಸ್ವಪ್ನಗಳನೆಲ್ಲ ಸೆಳೆಯುತ್ತ ಬೀಸಿ
    ಸ್ವಯಂಪಾಶವ.



ಮುಳುಮುಳುಂಗಿ ನೌಕೆ—ನಾವೆ
    ಬುದ್ಬುದವೇಳುತಿದೆ!
ತೆರೆಯ ಮೇಲೆ ತೆರೆಯು ಹಾಯ್ದು
    ಲೋಕವನಾಳುತಿದೆ.
ಬೇರೆ ದಾರಿಯಿಲ್ಲವೆಂದು
    ಕುಲದೆದೆಯನೆ ಸೀಳುತಿದೆ!

ಮುಗಿಲಿನಲ್ಲಿ ಭಾಸ್ಕರನದೊ! ಮಂಡಲದಲಿ ವಿರಮಿಸಿ
    ಕಾಯುತಿರುವನು.
ಶೂನ್ಯತಮದ ಕಡಲಿನಲೂ ನಿತ್ಯವು ಕೆಳಗಿಳಿದು ಬಂದು
    ನೀಯುತಿರುವನು.

ನಂದಿಸಲೆನೆ, ತೋಯಿಸಲೆನೆ ಮೇರೆವರಿದು ಬರೆ ಸಾಗರ,
ತೋಯುತಿರುವನು !

ತಪದ ಗಳಿಗೆ ಪೂರ್ಣವಾಗಿ ಮನವಂದಿರಲೊಂದು ದಿವಸ
ಕುಡಿಯುತಿರುವನು.
ಸಾಗರವನೆ ಚಂಡಕಿರಣ ಶ್ಯಾಮಲ ಕಲೆಯಾಗಿಸಿ ಸೆರೆ-
ಹಿಡಿಯುತಿರುವನು !
ಸೂರ್ಯವಂಶದಣುಗನಂದು ನಾಭಿಕಮಲದಲ್ಲಿ ಕಡಲ
ತಡೆಯುತಿರುವನು !

# ದ್ವಂದ್ವಮಯ ಜಗತ್ತು

ಕಲ್ಲನೆತ್ತಿ ನೋಡಲಲ್ಲಿ
ಒಂದು ಕರಿಯ ಚೇಳು.
ಆಮ್ರಫಲವನರಸುತಿರಲು,—
ಎದುರಿಗೆ ಕರಿಬೇವು.
ಕೇದಗೆ ಬನ ಸುತ್ತುವಾಗ
ಹಾವೆತ್ತಿದ ಹೆಡೆಯು!
ಅಮೃತದುಕ್ಕನರಸುತಿರಲು
ವಿಷಪಾನದ ಕೆನೆಯು!

ತಂತಿದೀಪ ಬಯಸಿ ಸ್ವಿಚ್ಚು
ಹಿಡಿಯೆ ಕೈಗೆ ಧಕ್ಕೆ!
ಕುದುರೆಯೆಂದು ಏರುತಿರಲು
ಬರಿ ಹೇಸರುಗತ್ತೆ!
ವಿಮಾನವೆಂದು ಸೇರಲೊಳಗೆ,—
ಬರಿ ಗಾಳಿಗೆ ಗಾಳಿ!
ರೇಲ್ವೆಯೆಂದು ಪಯಣಿಸಿರಲು,—
ಅಪಘಾತದ ದಾರಿ!

ಗೆಳೆಯನೆಂದು ನಂಬಿ ಕುಳಿತೆ.
ಎಂತಹ ಕಡುವೈರಿ!
ದಾಂಪತ್ಯವೆ ಸ್ವರ್ಗವೆಂದೆ.
ವಿಷಮತೆಗದು ಥೈಲಿ!
ಏಕಾಂತವೇ ಲೇಸೆಂದನು:
ಬರಿಯ ಹುಚ್ಚು ಹೊಳೆಯು.

ಲೋಕಾಂತವೇ ಉಚಿತವೆಂಬೆ
ಬರಿ ಸಂತೆಯ ನೊನೆಯುಃ.

ಸುಖದ ಗರ್ಭದಲ್ಲಿ ದುಃಖ,
ಕೇಡಿನ ಬೆನ್ನೊಳಗೆ ಒಳಿತು!
ಒಂದರಲೊಂದಿಂತು ಬೆರೆತು
ದ್ವಂದ್ವವಾದ ಸೃಷ್ಟಿಗೊಲಿದು
ರಜನಿಯಂಥ ಅಂಬರವನು
ತಾರೆ-ತಮವ ಕೂಡಿಸಿ
ಹೊಲಿವುದೆಂದನೇ ವಿಧಾತ,
ಬಾಳ ಕ್ರಮವ ತೂಗಿಸಿ?

ಸುಖದ ಗರ್ಭದಲ್ಲಿ ದುಃಖ,
ದುಃಖದ ಗರ್ಭದಲಿ ಶಾಂತಿ,
ಶಾಂತಿಯ ಗರ್ಭದಲಿ ಜ್ಞಾನ,
ಜ್ಞಾನಗರ್ಭದಲ್ಲಿ ನಾಂದಿ-
ಯುಹುದು ಪೂರ್ಣ ದೃಷ್ಟಿಪಥಕೆ.
ದೃಷ್ಟಿಯಿಂದ ಅರಳಲಿ,
ವಿಧಾತನೆಂದ, ದಿವ್ಯ ಬಾಳು
ಭೂತಲದಲಿ, ಗಗನದಿ!

# ಮನಸ್ಸು

ಮನವಿದೊಂದು ಕಾಂಡಪಟ.
ವಿಶ್ವರಮ್ಯ ನಾಟಕವದು
ಚಲಚ್ಚಿತ್ರವಾಗಿ ಮೂಡಿ
ರೂಪ—ವಾಣಿಯಾಗುತಲ್ಲಿ
ಸಾಗುತಿಹುದು, ಪಡಿನುಡಿಯಲು
ತಲೆಯ ಹಿರಿಯ ಗುಮ್ಮಟ!

ಮನವಿದೆತ್ತಲಿರುವ ತೆರೆ.
ಗಂಟೆಯಾಗಿ ಶ್ರೋತೃ ಸ್ತಬ್ಧ-
ನಾಗಿ ಕೇಳಿತು ಕೇಳುತಿರಲು,
ನೋಡುತಿರಲು ಅಂತರಂಗ-
ದೊಂದು ನಾಟಕಾಭಿನಯವು
ಹೃದಯಂಗಮವಾಗಿ ಸಾಗಿ,—
ಬೇರೆ ನಾಕ, ಬೇರೆ ಲೋಕ,
ಬೇರೆ ಪಾತ್ರಸಮುಚ್ಚಯವು!
ಕೊನೆಯಿಲ್ಲದ ನಾಟಕವದು.
ಪ್ರೇಕ್ಷಕ ದಣಿದೊಡನೆ ಮಾತ್ರ
ಬಿತ್ತು ತೆರೆ, ಬಂತು ಮರೆ!

ಮುಂದು ಮುಂದು ಕಾಂಡಪಟ,
ಹಿಂದೆ ಹಿಂದೆ ಅಂಕುಪಡದೆ.
ರೂಪವಾಣಿಯಾಗಿ ಬಂದ
ವಿಶ್ವನಾಟಕಕ್ಕೆ ಮತ್ತೆ
ಮನದ ಹಿಂದೆ ಹೂಡಿದಂಥ
ನಾಟಕಕ್ಕೆ ನಂಟದೇನು?

ಕ್ಷರಾಕ್ಷರದ ಕಗ್ಗಂಟನು
ಬಿಡಿಸಿದಂಥ ಋಷಿಯೆ ಬಲ್ಲ !
ತೆರೆಯನೆತ್ತು. ಸುರುಳಿ ಸುತ್ತು.
ಹೊರಗೊಳಗಾಗೊಂದೆಯಾಗಿ
ಒಂದೆ ದೃಶ್ಯಕಾವ್ಯ ಸರ್ವ-
ದಿಶೆಗಳಲ್ಲಿ ಪ್ರವಹಿಸುತ್ತ
ಕವೀಶ್ವರನ ಗುರಿಯು ತಿಳಿದು,—
ನೀನೆ ಪಾತ್ರ, ಪ್ರೇಕ್ಷಕನು !
ಹವಣನರಿತು ಅಭಿನಯಿಸಿ
ಕಣ್ತುಂಬುವ ತನಕ ನೋಡಿ
ಸಫಲವಾಗು ಜೀವವೇ !
ವಿಫಲವಿರಲು ಆಟವುಂಟೆ !

# ನೊದಲು ನೋಡಿದ ಕೋಣೆ

ಯಾವ ಯುಗದಲ್ಲಿ, ಯಾವ ಜನ್ಮದಲಿ
ನಾನು ಕಂಡ ಕೋಣೆ?
ಇದೇ ಮೊದಲಲ್ಲ, ಇದಕೂ ಮೊದಲು
ಕಂಡೆ, ದೇವರಾಣೆ!
ವಾಸ್ತುಶಿಲ್ಪವಿದು, ಈ ಮುಂದೋಟ,
ಮಣಿವಿಹ ಸೋಪಾನ,
ನಾಲುಕೋಣೆಗಳು, ಮುಂದಿಹ ಜಾಗ :—
ಇಲ್ಲವು ಅನುಮಾನ!

ಹೊಕ್ಕೆನೆನಿತೊ ಸಲ, ಮರಳಿದೆನೆನಿತೋ!
ಇಲ್ಲವು ಪರಿಮಿತಿಯು.
ಆ ಮನೆ ಇದುವೇ. ಆ ಕೋಣೆಯೆ ಇದು.
ಇಲ್ಲವು ಇತಿಮಿತಿಯು.
ಕಂಡಿಹುದೆಂದು? ಚಿಕ್ಕಂದಿನಲೋ?
ಅಲ್ಲ! ಕನಸಿನಲ್ಲೋ?
ಇಲ್ಲವೆ ಚಕ್ಕಂದದಿ ಕುಣಿದಾಡಿ
ತಣಿವ ಮನಸಿನಲ್ಲೊ?

ಕಡಲಂಚಿಗೆ ನಾ ಬೆಳೆಸಿರೆ ಪಯಣವ
ಕಣ್ಣಿಗೆ ಬಿದ್ದಿತ್ತೇ
ಇಂತಹ ಕೋಣೆ, ಇಂತಹ ಮಹಡಿ,—
ಮೂಲೆಯಲೆದ್ದಿತ್ತೇ
ಇಂಗ್ಲಂಡಿನಲಿ? ಇಟ್ಯಾಲಿಯ? ಫ್ರಾನ್ಸು?
ಇಲ್ಲ, ಇಲ್ಲ, ಇಲ್ಲ!
ಹೀಗಿರೆ ನನ್ನೀ ಥಾಳೈಸುವ ಸ್ಮೃತಿ
ಎಂತೊ? ದೇವ ಬಲ್ಲ!

ಸ್ವಪ್ನರಾಜ್ಯವನೆ ಸೂರೆಗೆಯ್ದಿಹೆನು.
ಅಲ್ಲಿಯು ಕುರುಹಿಲ್ಲ.
ಒಂದು ಸ್ವಪ್ನವೂ ತನ್ನದಿದೆಂದು
ಬಂದೆನಗರುಹಿಲ್ಲ.
ಆದರು ಕಣಿಯಿದು ಕಣ್ಣು ಕಟ್ಟಿಹುದು.
ಪ್ರಸನ್ನವಿದೆ ಚಿತ್ತ.
ಹೀಗಿರೆ ಗುಟ್ಟಿದು ತಿಳಿಯುವ ದಾರಿಯು
ತೋರುವದಿನ್ನೆತ್ತ?

ಅಯ್ಯೋ ಮಂಕೆ! ಒಹೋ ಮರುಳೆ!
ಇಲ್ಲಿಯೆ ತಪಿಸಿದನು
ಋಷಿವರ; ಜಗದುಗಮಾಗಮವನ್ನು
ಇಲ್ಲಿ ರೂಪಿಸಿದನು.
ಇಲ್ಲಿಯೆ ನಿಂತು, ಇಲ್ಲಿಯೆ ನೋಂತು
ಕಾಂತಿವಡೆದ, ಆರ್ಯ.
ಇಲ್ಲಿಯೆ ಮೈಗೊಂಡಿತು, ಬಲಗೊಂಡಿತು
ಅವತಾರದ ಕಾರ್ಯ.

ಆ ಆರ್ಯನಿಗೆ, ಆ ಕಾರ್ಯಕ್ಕೆ
ಮಾರುಹೋದ ಮನವು
ಮೈಮರೆಯಿತು ಈ ಕೋಣೆಗೆ ಬಂದು,
ಕಂಡಿತದಕೆ ಘನವು.
ತಾದಾತ್ಮ್ಯವು ದೇಹದ ಗೇಹದಲಿ,
ಗೇಹದ ದೇಹದಲಿ
ತುಂಬಿತು, ಸೂಸಿತು, ಎಲ್ಲೆಡೆ ಹರಿಯಿತು
ಪ್ರೇಮಪ್ರವಾಹದಲಿ.

ಚೈತ್ಯಪುರುಷನತಿ ಮಧುರಾಕರ್ಷಣ
ಎದೆಯೊಳುಕ್ಕಿ ಬಂದು
ಕಣ್ಮನ ಸೆಳೆದು ಆಳವನಳೆದು
ಬುದ್ಧಿಯಲ್ಲಿ ನಿಂದು
ಕಾಣದ ತಾಣವ ಕಂಡಂತೆಸಗಿತು
ಆತ್ಮನ ವರದೃಷ್ಟಿ
ತೆರೆಯಲು ತ್ರಿಕಾಲ ಒಂದೇ ಕಾಲ,
ಆತ್ಮೀಯವು ಸೃಷ್ಟಿ !

# ಜ್ಯೋತಿಗಂಗೆಯ ತಾಣ

ಇಲ್ಲ ಹೊಂಬೆಳಕು, ಇಲ್ಲ ಕೆಂಬೆಳಕು,
ಬರಿಯ ಶುಭ್ರ ಜ್ಯೋತಿ
ಕೈಯ್ಯಲಿರುವ ಬಿಳಿ ಹರಳದಿತ್ತು ಕುಣಿ-
ದಾಡದಿಹುದು ಕೋತಿ.
ಬೇರೆ ಪದರುಗಳ ವಿವಿಧ ಹೊದರುಗಳ
ಹಾಯ್ದು ಬಂದೆ ನಾನು.
ಜ್ಯೋತಿಗಂಗೆ ಹೊನಲಂತೆ ಹೊಮ್ಮುತಿಹ
ತಾಣ ಇದುವೆ ಏನು!

ಅಗ್ನಿ ಪುರುಷ ಚೇತರಿಸಿಕೊಂಡ
ಓ ಭಗ್ನ ಜೀವ, ನಿಲ್ಲು!
ಮೇಳಸ್ವರವಾಗಿ ಸುಭಗತರವಾಗಿ
ಕೇಳುತಿಹುದು ಸೊಲ್ಲು.
ನೂರು ಟಿಸಿಲಾಗಿ, ಹರಿದ ಎಸಳಾಗಿ,
ಹರಹಿದಂಥ ಹೊನಲು
ಮತ್ತೆ ಪ್ರವಹಿಸಿದೆ, ಮನವ ಮೋಹಿಸಿದೆ,
ಜೀವಗಂಗೆ ಎನಲು!

ಜ್ಞಾನದಲಿ ಭಾವ, ಭಾವದಲಿ ಕರ್ಮ,
ಒಂದಕೊಂದು ಕೂಡಿ
ತ್ರಿಮುಖ ಜೀವವಿದು ಏಕಮುಖವಾಗಿ
ಅಮೃತವನ್ನು ನೋಡಿ
ತಾನೆ ಅದುವಾಗಿ ಅದರ ಮುದವಾಗಿ,
ಓ! ತುರೀಯವಾಗಿ
ಸತ್ಯ–ಸೌಂದರ್ಯ ಜತೆ ಬೀರುತಿಪೆ
ಪ್ರೇಯ–ಶ್ರೇಯವಾಗಿ!

ಚೈತ್ಯಪುರುಷನನಿಮಿಷನು : ನಿಮಿಷದಲಿ
ಅರಿತು, ಬೆರೆತು, ಸುರಿತು
ಗೆಯ್ದ ಸಮನ್ವಯ, ಅದಕಿಳೆ ತನ್ಮಯ,
ಅಹಂಕೃತಿಯು ಮರೆತು.
ದ್ಯುತಿಯೇ ಶ್ರುತಿಯು, ಶ್ರುತಿಯೇ ಕೃತಿಯು,
ಕೃತಿಯೇ ಆಕೃತಿಯು :
ಇಂತಿದೆ ಮನ್ವಂತರದ ಫಲಶ್ರುತಿ,
ಯುಗಾಂತರ ಸಂಸ್ಕೃತಿಯು !

ಉಕ್ಕು–ಕಬ್ಬಿಣವ ಮಣಿಸಿ ಮಾಡಿದರು :
ಸುತ್ತುತಿಹುದು ಚಕ್ರ.
ಅದರ ಜಾಡು ಹಿಡಿದುರುಳುವಂಥ ಜಗ-
ವಿರಲಷ್ಟಾವಕ್ರ !
ಬರುವನು ಕಾಯು, ಬರುವ ಚಿರಾಯು,
ಬರುವ ಚೈತ್ಯಪುರುಷ,
ಚಕ್ರಧರನಾಗಿ, ಅಭಯಂಕರನಾಗಿ,
ತರುವನಮೃತ ಹರುಷ !

ಹರ್ಷಸ್ಪಂದನ, ಜ್ಯೋತಿಯ ನಂದನ,
ಆತ್ಮದ ಚಂದನವು :—
ಮರ್ತ್ಯಹೃದಯವಿದು ಅದುರಿ ಬೆದರಿ ಅಲು-
ಗಿವೆ ಹೃದ್ಬಂಧಗಳು.
ಆ ಅವತರಣ, ಅನಂತ ಸ್ಫುರಣ :—
ಇಲ್ಲವು ಪರಿಪಾರ !
ಓ ಹೃದಯವೆ ! ಈ ಪುರುಷನಿಗಾಗು
ರತ್ನಖಚಿತ ಪೀಠ !

ಇಲ್ಲ ಹೊಂಬೆಳಕು, ಇಲ್ಲ ಕೆಂಬೆಳಕು,
ಬರಿಯ ಶುಭ್ರ ಜ್ಯೋತಿ.
ಕೈಯ್ಯಲಿರುವ ಬಿಳಿ ಹರಳದಿತ್ತು ಕುಣಿ-
ದಾಡದಿಹುದು ಕೋತಿ.
ಬೇರೆ ಪದರುಗಳ ವಿವಿಧ ಹೊದರುಗಳ
ಹಾಯ್ದು ಬಂದೆ ನಾನು.
ಜ್ಯೋತಿಗಂಗೆ ಹೊನಲಂತೆ ಹೊಮ್ಮುತಿಹ
ತಾಣವಿದುವೆ ಏನು!

# ಜೀವನ

ಉಗಮು.
ಸರಿತ್ ಸಲಿಲದ ಸರಿಗಮು,
ಹೃದಯಂಗಮು!
ವಿಹರಿಸುವ ವಿಹಂಗಮು,
ಅದರ ಸಂಭ್ರಮು,
ಅಮೃತೋಪಮು!

ಗಮು! ಗಮು! ಗಮು!
ಉದ್ಯಮದ ಉದ್ಗಮು, ಉಗಮು!
ಗಮಕಿಸುವ ಗಮಕಿ,
ಗಮನಿಸುವ ಗಮನಿ,
ಗಮನೋದ್ಯುಕ್ತ ಗಮನೆ,
ಗಮಕಸಪ್ತಕದ ಗಭೀರೆ,
ಗಮ್ಯವಿಹ ಗಮ್ಮತುಗಂಪೆ,
ಚಮಕಿಸುವ ಚಮ್ಮಟಿಗೆ :—
ಗಮು! ಗಮು! ಗಮು!
ಉದ್ಯಮದ ಉದ್ಗಮು, ಉಗಮು!

ಗಮಕೃತ, ಗಮನೀಯ,
ಮೊದಲೊಮ್ಮೆ ಕಮನೀಯ,
ಮುಂದೊಮ್ಮೆ ಮಾರಕ,
ಆಗೆಲ್ಲಿ ತಾರಕ?
ಗಮು, ಗಮು, ಗಮು, ಗಮಕ.
ಯಮಃಲಮರ್ಗಳದ ಯಮಕ.

ನರ, ಸರ, ನರ, ನರಕ.
ವಿಭ್ರಮಿಸಿದ ಗಮನಾಗಮನ,
ದಗದಗಿಸಿ ದಹಿಸಿದ ಮನ,
ದುಸ್ತ್ರಾಮಸದ ದುಃಸ್ಸಂಗ,
ದುಸ್ಸಂಧಾನದ ಸಹಗಮನ,
ನಿರ್ಗತಿಕನ ನಿರ್ಗಮನ!

ಯಮ! ಯಮನಿಯಮದ ಸಂಯಮ!
ಶ್ರಂಥನದ ಸಂತತ ಶ್ರಮಣ!
ಆಶ್ರಮದ ಯಮೋಪಮ ಕ್ರಮ,
ಮಾನವನು ವಿಗತಭ್ರಮ.
ಮುಂದೊಂದು ಚಿನ್ಮಯದುಗಮ
ಮೊದಲಿನುಗಮಕ್ಕಿಂತ ಸುಗಮ!
ದುರ್ಗಮ ದುರ್ಗದೊಳಗಿಂದಿದೊ! ಅಮಮ!
ತಮೋಹರ ಜ್ಯೋತಿಯಾಗಮ!
ಇದೋ ನಿಗಮ!
ಇದೋ ಆಗಮ!
ಇದೋ ನಿಗಮಗೋಚರನ ನಿಗಮಾಗಮ!

ಭೌತಿಕದ ಪ್ರತ್ಯುದ್ಗಮನ,
ಚಿನ್ಮಯದ ಪ್ರತ್ಯಾಗಮನ,—
ಇದರ ಮಧುರ ಪುನರ್ಮಿಲನ
ವಿಶ್ವದ ಪ್ರತ್ಯಾರಂಭ!
ಆಗ ವಿಶ್ವವು ಮುಗಮುಗಿಸಿತು.
ಮನವೆಲ್ಲ ಗಮಗಮಿಸಿತು.
ಮಾನವರೆಲ್ಲ ಸಮ್ಯಕ್ ಸಂಬುದ್ಧರಾಗಿ
ವಿಶ್ವವೆಲ್ಲ ಸಮಾವಿರ್ಭೂತ ಸಂಗಮವಾಯಿತು.

ಆರ್ಯ-ದ್ರಾವಿಡ,
ಪ್ರಾಕೃತ-ಸಂಸ್ಕೃತ,
ಕೂಡಲ-ಸಂಗಮ,—
ಎಲ್ಲವೂ ಒಂದೆಯಾಗಿ—
ಸಂಕ್ರಾಂತಿಯ ಸಂಗೀತವಾಗಿ—
ಸಂಬದ್ಧವಾಗಿ ಪ್ರವಹಿಸಿತು!

# ಮಧ್ಯಾಹ್ನ

ಹಿಟ್ಲರನಮೂ  ಲಪುರುಷಚಂಡಭಾಸ್ಕರ
ನಿರ್ಮಿಸಿದ ನಿರ್ದಯಲ ಸೆರೆಮನೆಯು, ನೋಡಾ!
ಬೆಮರಿದೆ ಕಲ್ಲು
ಕಮರಿದೆ ಬಳ್ಳಿ.
ಭ್ರಮರವೂ
ಮಲಗಿದೆ ದಾಡಿಮದ ಹೂವಿನಲ್ಲಿ.
ಸೋರುತಿದೆವೀರ್ಯ.
ಹಾರುತಿದೆಪ್ರಾಣ.
ಅರೆಮುಚ್ಚಿವೆ ಕಣ್ಣು.
ನೀಲಿಮದ ಇಂದ್ರನೀಲದಲ್ಲಿ
ಅಸಹ್ಯ, ಅಸಾಧ್ಯ ಬಿಳಿ ಬೆಳಕಿನ
**ಕಠಾರಿ** ಇರಿದ ನಂಜು ಪಸರಿಸಿದೆ.
ಹಳೆಯ **ರಣ**ಹದ್ದೊಂದು
ವರ್ತು**ಲಾ**ಕಾರವಾಗಿ
ಯಮ ತೋರಿಸಿದ ಕರಿನಿಶಾನೆಯಂತೆ
ಓಲಾಡುತ್ತಿದೆ.
ಅಲಲಲಲಲಲಲಲಲ!
ಏನು ಜ**ಗ**, ಏನು ಯು**ಗ**!
ಗ, ಗ, ಗ, ಗ, ಗ!

# ದುಃಸ್ವಪ್ನ

ಓ ವಜ್ರಸಮ ವ್ಯಕ್ತಿತ್ವವೇ!
ಗಾಂಧಾರೀ ದೃಷ್ಟಿಯಾಡದ ಚಿತ್ರದ್ರವ್ಯ
ನಿನ್ನ ಮುಖ್ಯಪ್ರಾಣದಲ್ಲಿಯೇ ಸಿಂಹಾಸನಸ್ಥವಾಗಿದೆ.
ಓ ವನಸ್ಪತಿರಾಜ, ಚಂದ್ರ!
ನಿನ್ನ ಮಂಜುಬೆಟ್ಟಗಳ ಮೇಲೆ
ನಿಗಿನಿಗಿ ಕೆಂಡಗಳ ಕುಂಡದಲ್ಲಿ ಬಿದ್ದು
ಮೊಲವೊಂದು ಸಾಯುತ್ತಿದೆ.
ಬೆಂಚುಗಲ್ಲಿನ ಪರ್ವತದ ಹೊದರಿನಲ್ಲಿ
ಮೇಣದ ಗವಿಯೊಂದಿದೆ.
ಢಾಲಿನಂತಹ ಭದ್ರಾಕಾರದಲ್ಲಿ
ಹೌಹಾರುವ ಹಣ್ಣಿಲಿಯೊಂದು ಮನೆಮಾಡಿಕೊಂಡಿದೆ.
ಏನು ವಿಚಿತ್ರ! ಎನಿತು ಭಯಂಕರ!

ಅವ್ಯಕ್ತ ಅಂತರಬೆಂತರವೇ
ಮೂರ್ತಿಯಾದ ಈ ಗುಡಿಯಲ್ಲಿ
ಕತ್ತಲೆಯ ನಂದಾದೀಪ
ಅಳ್ಳೆದೆಯ ತೈಲವನ್ನು ಸುಡುತ್ತಿದೆ.
ನೆನಪಿನ ಹೂಬತ್ತಿ
ಪ್ರಾಣ ಪ್ರಣತಿಯಲ್ಲಿ
ಹಾವಿನಂತೆ ಬಿದ್ದುಕೊಂಡಿದೆ.
ಗರುಡವಾಹನನೇ!
ಯಾವ ಗರುಡನ ಗೆರೆ ತೋರಿಸುವಿ?
ಕಿರಣರಾಶಿಯೇ!
ಯಾವ ನಿನ್ನ ಕಿರಣ
ಈ ಅಂಧಂತಮಸ್ಸನ್ನು ಮುಟ್ಟೀತು?

ಈ ಪಾತಾಳಬಾವಿಯಲ್ಲಿ
ತುಂಬಿ ಕೆಳಗಿಳಿದ ಕೊಡವನ್ನು
ಯಾವ ಪಾತಾಳಗಡೆ ಹೊರಗೆ ತಂದೀತು ?
ಯಾವ ಗಾಂಧಾರೀ ದೇವಿಯ ಕೃಪಾದೃಷ್ಟಿ
ಈ ಊರುಭಂಗವನ್ನು ತಪ್ಪಿಸೀತು ?

ಹುಟ್ಟುಗುರುಡನನ್ನು ಮದುವೆಯಾಗಿ
ಇದ್ದ ಕಣ್ಣುಗಳಿಗೆ ಸಹ ಹೊರತಾದ ತಾಯಿ !
ನಿನ್ನ ಧೃತರಾಷ್ಟ್ರ ಸಂತತಿ
ಪಟಪಟನೆ ಹುಟ್ಟುತ್ತಿದೆ. ಸಾಯುತ್ತಿದೆ!
ಕಣ್ದೆರೆದು ನೋಡು, ತಾಯಿ !
ಬದುಕಿಸು ಅಲ್ಪಾಯು ಸಂತತಿಯನ್ನು
ಅಮೃತದ ಔಂಷರಸನ್ನಾಗಿಸು.
ಉದ್ಧರಿಸು, ತಾಯಿ !

# ಮನ್ವಂತರ

ಬಂತೋ !
ಜ್ವಾಲೆಯಿದು ಬಂತು !

ಶಾಂತಿಮಹಾಸಾಗರದ ಗೋರಿಯೊಳಗಿಂದ
ಭೂತನಾಯ್ತು ಬಂದ !
ಭೂಮಿತಾಯಿಯಾ ಬೇಡೊಡಲಿನಿಂದ
ನೋಡು ಸಿಡಿಲಿನಂದ !
ಯಕ್ಷಕಿನ್ನರರ ಜಿಹ್ವೆ ಜ್ವಾಲೆಗಾಗಿ
ಓ ! ಉಯ್ಯಾಲೆಯಾಗಿ !
ಪರಾ ಪ್ರಕೃತಿಯಾ ಪಾದರಜವು ಸೋಂಕಿ
ಆಗಿ ಬೆಂಕಿ ಬೆಂಕಿ !
ಆದಿ ಬ್ರಹ್ಮನಿಗೆ ಆಗಿ ಧ್ಯಾನ ಭಂಗ,
ಸೀಳಿ ಉತ್ತಮಾಂಗ !
ಮುಗಿಲ ಮೇಲಿಂದ ನೆಲದ ಕೆಳಗಿಂದ
ಮನದ ಒಳಗಿಂದ ಜಗದ ಹೊರಗಿಂದ
ಬಂತೋ !
ಜ್ವಾಲೆಯಿದು ಬಂತು !

ದಿನದ ತಿನಿಸು ತಿಂದುಂಡು ಬಂತೆ
ನಿನಗಿಂದು ಈ ಬೇಸರ,
ಓ ವೈಶ್ವಾನರ !
ಮಾಸತಿಯ ಹಳದಿ–ಕುಂಕುಮದ
ತೊಡಿಗೆ ತೊಡೆದಂಥ ಅಗ್ನಿಪುರುಷ !
ಇಷ್ಟುದೆ ನಿನಗೆ ಹರುಷ ?

ಪ್ರಳಯ ಕಾಲದಾ ಗಾಳಿ ಬೀಸಿ ಇಳೆ-
ಯಾಯ್ತು ಯುದ್ಧಶಾಲೆ,
ಬಂತು, ಬಂತು ಜ್ವಾಲೆ!
ಅಂತೆ ಚೀನ, ತಿಬೇಟು, ವೀಯೆಟ್-
ನಾಮ್, ಮಂಚೂರಿಯು, ಕೋರಿಯ,
ತೋರಿರುವವು ದಾರಿಯ!
ನೆಕ್ಕಿ ನೆತ್ತರನೆ ಮುಗಿಲಿನೆತ್ತರವ-
ನಲ್ಲಗಳೆವ ಜ್ವಾಲೆ,
ಸವುದೆ ರುಂಡಮಾಲೆ!
ಯಜ್ಞಪಶುವಂತೆ ನಡೆದ ಮನುಕುಲವು
ಸಾಗುತಿಹುದು ಮುಗ್ಧ,
ಇಂದು ನಾಳೆ ದಗ್ಧ!
ಬಂತೋ!
ಜ್ವಾಲೆಯಿದು ಬಂತು!

ಧರ್ಮಸಂಕರ, ಓ ಭಯಂಕರ!
ಬಾಳಲಾರನಿನ ಕಿಂಕರ,
ಓ ಶಿವಶಂಕರ!
ನೀತಿನ್ಯಾಯಗಳು ಗೋರಿಗಟ್ಟಿ
ಕಲ್ಯಾಣಕಿಹುದು ಧ್ವಂಸ,
ಮರುಗಿ ಜೀವಹಂಸ!
ಕೊಳೆತ ಪುಷ್ಕರಿಣಿ, ತ್ಯಕ್ತ ಸುಗೃಹಿಣಿ,
ಕುಲದ ಜೀವ ನಿರ್ಜೀವ:
ಎಲ್ಲಿರುವನು ದೇವ?
ಅನ್ನಮಯದ ಆಡಿಂದು ಅರಚುತಿದೆ:
ಇಲ್ಲವದಕೆ ಹಸಿರು,
ಬೆಂಕಿ ತುಂಬಿ ಬಸಿರು!

ಮನೋಮಯದ ಕಾಡಾನೆ ಧೀಂಕಿಟ್ಟು
ಹಾಳುಗೆಡವುತಿಹುದು.
ಬುದ್ಧಿ ಎಡವುತಿಹುದು.
ಪ್ರಾಣಮಯದ ಶಾರ್ದೂಲ ಕೆಣಕುತಿರೆ,
ಓ ಮದೋನ್ಮತ್ತ!
ಇನ್ನು ತೆರಳ್ವುದೆತ್ತ?
ಬಂತೋ!
ಜ್ವಾಲೆಯಿದು ಬಂತು!

ಅಳಿದು ಸಾಮ್ರಾಜ್ಯ, ಕೊಳಿತು ಸ್ವಾರಾಜ್ಯ,
ಇನ್ನಾವುದು ಭೋಜ್ಯ?
ಎಲ್ಲವಿಹುದು ತ್ಯಾಜ್ಯ!
ಹೋದ ಋತ್ವಿಜ, ಕಳೆದ ಕ್ಷತ್ರಿಯ,
ವಿಗತಪ್ರಾಣ ವೈಶ್ಯ:
ಎಲ್ಲೆಡೆ ನೈರಾಶ್ಯ.
ಅಂತೆ ಬಂತಿದೋ ಮಹಾಜ್ವಾಲೆಯಿದು:
ಬಂದ, ತಾಳು, ಶೂದ್ರ!
ಎನಿತಿದವನ ರೌದ್ರ!
ಸರ್ವರ ಸುಖಸ್ವಾತಂತ್ರ್ಯವ ಬಯಸಿ
ಸರ್ವರ ಬಂಧಿಸುವ!
ತನ್ಮಾತ್ರೆಗಳಲಿ ತನ್ಮೂಲವನು ಕಂಡನು—
ಸಂಧಿಸುವ!
ಏನಾ ಮಬ್ಬು, ಏನದು ಕೊಬ್ಬು,
ಆ ರಿಂಗಣ-ಗುಣಿತ,
ಆ ಶೋಣಿತಭಣಿತ!
ಮೇಲೆ ಕೆಳಗೆಂದು ಹೊರಗೆ-ಒಳಗೆಂದು
ತಾರತಮ್ಯದಿಂದ

ಬಾಳಿದಂಥ ಮಾನವನೇ! ಕಣ್ದೆರೆ!
ಭೋಗಿಸು ಇದರಂದ!
ಬಂತೋ!
ಜ್ವಾಲೆಯಿದು ಬಂತು!

ಜಾನಪದವಿಂತು: ಧರ್ಮಪದಕೆ
ಇನ್ನೆಂದು ಮುಂದೆ ದಾರಿ?
ತಾಯಿಯೆ ಬಾ ತೋರಿ!
ಕೈಯ್ಯಕಾಲ ಹೆಡಮುರಿಗೆ ಬಿಗಿದರೂ
ಅಂಗುಷ್ಟದ ಸೆಲೆಯು,
ಅದೆ ಅಮೃತದ ನೆಲೆಯು!
ಸ್ವಾತಂತ್ರ್ಯದ ದಿಗ್ಬಂಧನದೊಳಗೆ
ಅರಳಿದೆ ಸಂಯಮವು.
ವೃತ್ತ್ಯಸಮವಾದ ವ್ಯೂಹದೆದೆಯಲಿ
ಉಕ್ಕಿದೆ ಸಂಭ್ರಮವು.
ಜಂತ್ರಿಯಾದ ಶೂದ್ರನು ಹೊಂದಿಸಿದೀ
ಲೋಕದ ಎದೆಯೊಳಗೆ
ಪರಂಜ್ಯೋತಿ ಬೆಳಗೆ,
ಚಕ್ರವ್ಯೂಹವೇ ಸುದರ್ಶನದ
ಸೋಪಾನವಾಗಿ ನಿಲಲು,
ಕಾರ್ಮಿಕನೊಂದಾಗಿಸಿದೀ ಲೋಕದಿ
ಸ್ವಧರ್ಮವು ಗೆಲಲು,
ಜನವೇ ದೈವ. ಸಮಾಜರಚನೆ
ಅಹುದು ಬರಿ ನಿಮಿತ್ತ.
ತನ್ನ ಜೀವನಕೆ ತಾನೆ ನಿಯತಿಯಿರೆ
ಸುನಿರ್ಮಲ ಚಿತ್ತ,

ಗುಂಪು–ಗುಂಪಾಗಿ ಸೊಂಪುವಡೆದಿಹುದು
ಮಹಾಜೀವನವು,
ಆಗುತ ಪಾವನವು.
ಚಿತ್ತ ಚಿತ್ತದಲಿ ಹೃದಯ ಹೃದಯದಲಿ
ಲೀನವು ಅನುದಿನವು.
ಬಂದ ಬೇರೆ ಮನವು !
ಚಿದ್ದರ್ಪಣದಲಿ ಒಬ್ಬರೊಬ್ಬರಾ
ಮೊಗವ ನೋಡಿಕೊಂಡು,
ಒಂದೇ ಗಿಳಿಹಿಂಡು !
ಒಂದೇ ಕುಲವು, ಒಂದೆ ಸಮಾಜ,
ಒಂದನಂತ ಗುರಿಯು,
ಹಿಗ್ಗಲದರ ಸಿರಿಯು !
ಕಾರ್ಮಿಕ ತಂದ ವಿಶಾಲತೆ ಪಡೆದಿರೆ
ಎತ್ತರ–ಆಳವನು,
ವ್ಯಕ್ತಿಮತ್ತೆ ತನ್ನೊಳಗೇ ಪಡೆದು
ಸುಂದರ ಮೇಳವನು,
ಮಾನವ ನಲಿಯುವನಾದಿ ಶಕ್ತಿಯಾ
ಕುವರನಾಗಿ ಅಂದು,
ಅನಾದ್ಯನಂತ ಅಬಾಧಿತ ಪ್ರಭೆಗೆ
ಉಘೋ ಉಘೋ ಎಂದು !
ಬಂತೋ !
ಜ್ವಾಲೆಯಿದು ಬಂತು !

